

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 250 |
| ಸದಸ್ಯರ ಹೆಸರು | ಶ್ರೀ ಎಂ. ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 14.12.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ, ಹಿರಿಯ ನಾಗರಿಕರ ಸಬಲೀಕರಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಹಲವಾರು ಕಡೆ ಅಕ್ರಮವಾಗಿ ಗಣಿಗಾರಿಕೆ ನಡೆಯುತ್ತಿದ್ದು, ಈ ಅಕ್ರಮ ಗಣಿಗಾರಿಕೆಯನ್ನು ತಡೆಗಟ್ಟಲು ಸರ್ಕಾರ ಯಾವ ಕ್ರಮವನ್ನು ಕೈಗೊಂಡಿದೆ; (ವಿವರ ನೀಡುವುದು) | ರಾಜ್ಯದಲ್ಲಿ ಅಕ್ರಮ ಕಲ್ಲು ಗಣಿಗಾರಿಕೆಯನ್ನು ತಡೆಗಟ್ಟಲು ಗಣಿ ಮತ್ತು ಭೂವಿಜ್ಞಾನ ಇಲಾಖೆಯಿಂದ ಈ ಕೆಳಕಂಡಂತೆ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.<br>1. ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಐ 21 ಎಂಎಂಎನ್ (2) 2014, ದಿನಾಂಕ 21.01.2014 ರಂತೆ ಗಣಿ ಮತ್ತು ಖನಿಜ (ಅಭಿವೃದ್ಧಿ ಮತ್ತು ನಿಯಂತ್ರಣ) ಕಾಯ್ದೆ, 1957ರ ಕಲಂ 21 ಹಾಗೂ 22 ರಡಿ ಮತ್ತು ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994ರ ನಿಯಮ 43 ಮತ್ತು 46 ರಂತೆ ಅನಧಿಕೃತ ಗಣಿಗಾರಿಕೆ, ಸಾಗಾಣಿಕೆ ಮತ್ತು ದಾಸ್ತಾನು ವಿರುದ್ಧ ಕ್ರಮವಹಿಸಲು, ಕಂದಾಯ, ಅರಣ್ಯ ಪೊಲೀಸ್ ಹಾಗೂ ಗಣಿ ಮತ್ತು ಭೂವಿಜ್ಞಾನ ಇಲಾಖೆ ಅಧಿಕಾರಿಗಳಿಗೆ ಅಧಿಕಾರವನ್ನು ಪ್ರತ್ಯಾಯೋಜಿಸಲಾಗಿದೆ.<br>2. ಗಣಿ ಮತ್ತು ಭೂವಿಜ್ಞಾನ ಇಲಾಖೆಯಲ್ಲಿ ಖನಿಜಗಳ ಗಣಿಗಾರಿಕೆಗಾಗಿ ಗಣಿ ಗುತ್ತಿಗೆಗಳನ್ನು ಪಾರದರ್ಶಕವಾಗಿ ಹರಾಜು ಮೂಲಕ ಮಂಜೂರು ಮಾಡಲಾಗುತ್ತಿದೆ.<br>3. ಗಣಿ ಮತ್ತು ಭೂವಿಜ್ಞಾನ ಇಲಾಖೆಯಿಂದ ರಾಜ್ಯದಲ್ಲಿ ಮಂಜೂರು ಮಾಡಿರುವ ಕಲ್ಲು ಗಣಿಗುತ್ತಿಗೆ ಪ್ರದೇಶಗಳಲ್ಲಿ ಹಾಗೂ ಕಲ್ಲು ಗಣಿಗುತ್ತಿಗೆ ಪ್ರದೇಶವನ್ನು ಒತ್ತುವರಿ ಮಾಡಿ ನಿಯಮ ಉಲ್ಲಂಘಿಸಿ ಸಂಚಿತ ಆಡಿಟ್ ಪ್ರಮಾಣಕ್ಕಿಂತ ಅಧಿಕವಾಗಿ ಉಪಖನಿಜವನ್ನು ಉತ್ಪಾದಿಸಿ, ಸಾಗಾಣಿಕೆ ಮಾಡಿರುವುದನ್ನು ಕರ್ನಾಟಕ ರಾಜ್ಯ ದೂರ ಸಂವೇದಿ ಕೇಂದ್ರ (KSRSAC) ರವರಿಂದ ಕಲ್ಲುಗಣಿ ಗುತ್ತಿಗೆ ಪ್ರದೇಶಗಳ ಡ್ರೋಣ್ / ಡಿ.ಜಿ.ಪಿ.ಎಸ್ ಸರ್ವೆ ಕೈಗೊಂಡು ಮೂಲ ಖನಿಜ ಉತ್ಪಾದನಾ ಸ್ಥಳದಲ್ಲಿ ರಾಜಧನ ಸೋರಿಕೆ ತಡೆಗಟ್ಟಲು ಕ್ರಮವಹಿಲಾಗುತ್ತಿದೆ.<br>4. Integrated Lease Management System (ILMS) version-II ಜಾರಿಗೊಳಿಸಲಾಗುತ್ತಿದ್ದು, ಅನಧಿಕೃತ ಖನಿಜ ಸಾಗಾಣಿಕೆಯನ್ನು ತಡೆಗಟ್ಟಲು ಖನಿಜ ಸಾಗಾಣಿಕಾ ವಾಹನಗಳಿಗೆ GPS ಅಳವಡಿಸಿ ಕೇಂದ್ರೀಕೃತವಾಗಿ ನಿಗಾವಹಿಸಲು ತಂತ್ರಾಂಶ ರೂಪಿಸಲಾಗುತ್ತಿದೆ. |

5. ಅನಧಿಕೃತ ಖನಿಜ ಸಾಗಾಣಿಕೆಯನ್ನು ಪತ್ತೆ ಹಚ್ಚಲು ಖನಿಜ ರವಾನೆ ಪರವಾನಿಗೆ ಕಡ್ಡಾಯಗೊಳಿಸಲಾಗಿದ್ದು, ಖನಿಜ ರವಾನೆ ಪರವಾನಿಗೆ ವಿಶೇಷ ರಕ್ಷಣಾತ್ಮಕ ಹಾಳೆಯಲ್ಲಿ ವಿತರಿಸಲಾಗುತ್ತಿದೆ.

6. ಮಂಜೂರಾದ ಗಣಿ / ಕಲ್ಲುಗಣಿ ಗುತ್ತಿಗೆ ಪ್ರದೇಶಗಳನ್ನು ಹೊರತುಪಡಿಸಿ ಗುತ್ತಿಗೆ ಪ್ರದೇಶದ ಹೊರಭಾಗದಲ್ಲಿ ಒತ್ತುವರಿ ಮಾಡಿ ಗಣಿಗಾರಿಕೆ ನಡೆಸುವುದನ್ನು ತಡೆಗಟ್ಟಲು Geo-fencing ಅಳವಡಿಸಿ ನಿರ್ವಹಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.

7. ಅನಧಿಕೃತ ಗಣಿಗಾರಿಕೆಯನ್ನು ತಡೆಗಟ್ಟಲು ಖನಿಜ ರಕ್ಷಣಾ ಪಡೆ ಸ್ಥಾಪಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.

8. ಅನಧಿಕೃತ ಕಲ್ಲು ಗಣಿಗಾರಿಕೆ / ಸಾಗಾಣಿಕೆಯನ್ನು ನಿಯಂತ್ರಿಸಲು ಜಿಲ್ಲಾ ಟಾಸ್ಕ್ ಫೋರ್ಸ್ (ಗಣಿ) ಸಮಿತಿಯಿಂದ ರಾಜ್ಯದಲ್ಲಿ ಆಯಾಕಟ್ಟಿನ ಪ್ರದೇಶಗಳಲ್ಲಿ ತನಿಖಾ ಠಾಣೆಗಳನ್ನು ತೆರೆದು ಕಾರ್ಯ ನಿರ್ವಹಿಸಲಾಗುತ್ತಿದೆ. ಅಲ್ಲದೆ ಆಯಾ ಜಿಲ್ಲಾ ವ್ಯಾಪ್ತಿಗಳಲ್ಲಿ ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದ ಚಾಲಿತ ದಳವನ್ನು ರಚಿಸಿಕೊಂಡು ಅನಧಿಕೃತ ಕಲ್ಲು ಗಣಿಗಾರಿಕೆ / ಸಾಗಾಣಿಕೆಯನ್ನು ನಿಯಂತ್ರಿಸಲಾಗುತ್ತಿದೆ.

ಅಕ್ರಮ ಕಲ್ಲು ಗಣಿಗಾರಿಕೆ ನಡೆಸುತ್ತಿರುವವರ ವಿರುದ್ಧ ಗಣಿ ಮತ್ತು ಖನಿಜ (ಅಭಿವೃದ್ಧಿ ಮತ್ತು ನಿಯಂತ್ರಣ) ಕಾಯ್ದೆ, 1957 ಮತ್ತು ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮಗಳು, 1994ರಂತೆ ಮೊಕದ್ದಮೆಗಳನ್ನು ದಾಖಲಿಸಿ, ದಂಡವನ್ನು ವಿಧಿಸಿ ಸಂಗ್ರಹಿಸಲಾಗಿರುತ್ತದೆ.

ಕಳೆದ ಮೂರು ವರ್ಷಗಳಲ್ಲಿ ಕೈಗೊಂಡ ಕ್ರಮಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ. | ವರ್ಷ | ಪತ್ತೆ ಹಚ್ಚಿದ ಪ್ರಕರಣಗಳು | ದಾಖಲಿಸಿರುವ ಮೊಕದ್ದಮೆಗಳ ಸಂಖ್ಯೆ | ವಸೂಲಾದ ದಂಡ (ರೂ.ಲಕ್ಷಗಳಲ್ಲಿ) |
|---|---|---|---|---|
| 1. | 2018-19 | 413 | 108 | 1213.37 |
| 2. | 2019-20 | 266 | 117 | 908.70 |
| 3. | 2020-21 | 580 | 99 | 781.06 |
| **ಒಟ್ಟು** | | **1259** | **324** | **2903.13** |

ಆ) ರಾಜ್ಯದಲ್ಲಿ ಗಣಿಗಾರಿಕೆಗಾಗಿ ಇಲ್ಲಿಯವರೆವಿಗೂ ಎಷ್ಟು ಪರವಾನಿಗೆ ನೀಡಲಾಗಿದೆ; (ಜಿಲ್ಲಾವಾರು ವಿವರ ನೀಡುವುದು)

ರಾಜ್ಯದಲ್ಲಿ ನಿರ್ದಿಷ್ಟ ಉಪಖನಿಜಗಳ ಗಣಿಗಾರಿಕೆಗಾಗಿ 581 ಕಲ್ಲುಗಣಿ ಗುತ್ತಿಗೆಗಳನ್ನು 3090.25 ಎಕರೆ ಪ್ರದೇಶದಲ್ಲಿ ಹಾಗೂ ನಿರ್ದಿಷ್ಟವಲ್ಲದ ಉಪಖನಿಜಗಳ ಗಣಿಗಾರಿಕೆಗಾಗಿ 2940 ಗುತ್ತಿಗೆಗಳನ್ನು 12,958.02 ಎಕರೆ ಪ್ರದೇಶದಲ್ಲಿ ಮಂಜೂರು ಮಾಡಲಾಗಿರುತ್ತದೆ.

ವಿವರಗಳನ್ನು **ಅನುಬಂಧದಲ್ಲಿ** ನೀಡಲಾಗಿದೆ.

| | | |
|---|---|---|
| ಇ) | ಗ್ರಾಮಗಳ ಸರಹದ್ದಿನ ಪ್ರದೇಶಗಳಲ್ಲಿಯೇ ಗಣಿಗಾರಿಕೆ ಸ್ಫೋಟ ಮಾಡುತ್ತಿದ್ದು, ಇದರಿಂದ ಗ್ರಾಮದ ಮನೆಗಳು ಹಾನಿಗೊಂಡಿದ್ದು / ಜನರಿಗೆ ಆರೋಗ್ಯ ಸಮಸ್ಯೆ ಕಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುತ್ತದೆ. |
| ಈ) | ಬಂದಿದ್ದಲ್ಲಿ ಇದನ್ನು ತಡೆಗಟ್ಟಲು ಸರ್ಕಾರ ಕೈಗೊಂಡ ಕ್ರಮವೇನು? (ವಿವರ ನೀಡುವುದು) | ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994ರ ನಿಯಮ 6(2) ರಂತೆ **ಸ್ಫೋಟಕ ಬಳಸಿ** ಗಣಿಗಾರಿಕೆ ನಡೆಸುವ ಸಂದರ್ಭದಲ್ಲಿ ಸಾರ್ವಜನಿಕ ರಚನೆಗಳಾದ ರಸ್ತೆ, ಶಾಲೆ, ದೇವಸ್ಥಾನ, ರೈಲ್ವೆ ಲೈನ್ ಹಾಗೂ ಕೆರೆ, ಕಟ್ಟಡಗಳ ಗಡಿಯಿಂದ **200 ಮೀಟರ್** ಅಂತರವನ್ನು ಕಾಯ್ದಿರಿಸಿಕೊಂಡು ಹಾಗೂ **ಸ್ಫೋಟಕ ಬಳಸದೆ** ಗಣಿಗಾರಿಕೆ ನಡೆಸುವ ಪ್ರಕರಣಗಳಲ್ಲಿ ಸದರಿ ಸಾರ್ವಜನಿಕ ರಚನೆಗಳಿಂದ **50 ಮೀಟರ್ ಅಂತರವನ್ನು** ಕಾಯ್ದಿರಿಸಿಕೊಂಡು ಕಲ್ಲುಗಣಿ ಗುತ್ತಿಗೆಗಳನ್ನು ಮಂಜೂರಾತಿ ನೀಡಲಾಗುತ್ತಿದೆ. |

ಸಂಖ್ಯೆ ಸಿಐ 606 ಎಂಎಂಎನ್ 2021

Halappa B

**(ಆಚಾರ್ ಹಾಲಪ್ಪ ಬಸಪ್ಪ)**
ಗಣಿ ಮತ್ತು ಭೂವಿಜ್ಞಾನ ಹಾಗೂ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು
ವಿಕಲಚೇತನರ, ಹಿರಿಯ ನಾಗರಿಕರ
ಸಬಲೀಕರಣ ಸಚಿವರು.

ರಾಜ್ಯದಲ್ಲಿ ಉಪಖನಿಜಗಳ ಗಣಿಗಾರಿಕೆ ಸಂಬಂಧ ಚಾಲ್ತಿಯಲ್ಲಿರುವ ಕಲ್ಲುಗಣಿ ಗುತ್ತಿಗೆಗಳ ಜಿಲ್ಲಾವಾರು ವಿವರಗಳು

| ಕ್ರಸಂ. | ಜಿಲ್ಲೆ | ಚಾಲ್ತಿ ನಿರ್ದಿಷ್ಟ ಕಲ್ಲುಗಣಿ ಗುತ್ತಿಗೆಗಳು | | ಚಾಲ್ತಿ ನಿರ್ದಿಷ್ಟವಲ್ಲದ ಕಲ್ಲುಗಣಿ ಗುತ್ತಿಗೆಗಳು | |
|---|---|---|---|---|---|
| | | ಮಂಜೂರಾದ ಒಟ್ಟು ಗುತ್ತಿಗೆಗಳು | ಒಟ್ಟು ವಿಸ್ತೀರ್ಣ (ಎಕರೆ/ ಗುಂಟೆಗಳಲ್ಲಿ) | ಮಂಜೂರಾದ ಒಟ್ಟು ಗುತ್ತಿಗೆಗಳು | ಒಟ್ಟು ವಿಸ್ತೀರ್ಣ (ಎಕರೆ/ ಗುಂಟೆಗಳಲ್ಲಿ) |
| 1 | ಬೆಂಗಳೂರು ಗ್ರಾಮಾಂತರ | 38 | 42.33 | 61 | 232.02 |
| 2 | ಬೆಂಗಳೂರು ನಗರ | 0 | 0.00 | 170 | 618.19 |
| 3 | ಚಾಮರಾಜನಗರ | 48 | 218.05 | 45 | 113.20 |
| 4 | ಚಿಕ್ಕಮಗಳೂರು | 11 | 61.01 | 94 | 275.05 |
| 5 | ಚಿಕ್ಕಬಳ್ಳಾಪುರ | 61 | 240.03 | 113 | 571.02 |
| 6 | ದಕ್ಷಿಣ ಕನ್ನಡ | 5 | 5.12 | 131 | 321.33 |
| 7 | ಉಡುಪಿ | 5 | 15.28 | 127 | 408.01 |
| 8 | ಹಾಸನ | 21 | 148.08 | 125 | 920.21 |
| 9 | ಕೋಲಾರ | 7 | 32.35 | 60 | 260.17 |
| 10 | ಮಂಡ್ಯ | 2 | 20.00 | 116 | 236.02 |
| 11 | ಮೈಸೂರು | 9 | 113.30 | 14 | 25.10 |
| 12 | ಕೊಡಗು | 5 | 9.15 | 40 | 160.22 |
| 13 | ರಾಮನಗರ | 59 | 358.02 | 100 | 579.32 |
| 14 | ಶಿವಮೊಗ್ಗ | 0 | 0.00 | 68 | 66.07 |
| 15 | ತುಮಕೂರು | 29 | 104.06 | 161 | 761.29 |
| 16 | ಬೆಳಗಾವಿ | 9 | 63.00 | 258 | 1032.03 |
| 17 | ಬಳ್ಳಾರಿ | 10 | 35.24 | 28 | 199.13 |
| 18 | ಬೀದರ್ | 0 | 0.00 | 22 | 56.23 |
| 19 | ಬಿಜಾಪುರ | 0 | 0.00 | 78 | 219.08 |
| 20 | ಚಿತ್ರದುರ್ಗ | 9 | 52.15 | 122 | 761.38 |
| 21 | ದಾವಣಗೆರೆ | 1 | 4.10 | 90 | 396.27 |
| 22 | ಧಾರವಾಡ | 0 | 0.00 | 137 | 227.31 |
| 23 | ಗದಗ | 4 | 24.29 | 124 | 727.62 |
| 24 | ಹಾವೇರಿ | 0 | 0.00 | 68 | 331.21 |
| 25 | ಗುಲ್ಬರ್ಗಾ | 0 | 0.00 | 197 | 1012.09 |
| 26 | ಯಾದಗಿರಿ | 0 | 0.00 | 27 | 136.07 |
| 27 | ಹೊಸಪೇಟೆ | 0 | 0 | 169 | 905.12 |
| 28 | ಬಾಗಲಕೋಟೆ | 46 | 731.28 | 59 | 529.34 |
| 29 | ಕೊಪ್ಪಳ | 143 | 577.37 | 47 | 300.08 |
| 30 | ರಾಯಚೂರು | 59 | 236.04 | 71 | 457.26 |
| 31 | ಉತ್ತರ ಕನ್ನಡ | 0 | 0.00 | 18 | 120.38 |
| | ಒಟ್ಟು | **581** | **3090.25** | **2940** | **12958.02** |

CI 606 mma 2021

04.12.2021

ಡಾ:ಪಿ.ವಿ. ರಾಮನ್
ಜಂಟಿ ನಿರ್ದೇಶಕರು (...),
ಗಣಿ ಮತ್ತು ಭೂ ವಿಜ್ಞಾನ ಇಲಾಖೆ,

581-2940 Quarry Lease list